## ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **132**

**ಸದಸ್ಯರ ಹೆಸರು** : ಶ್ರೀ ರಘುನಾಥ್ ರಾವ್ ಮಲ್ಕಾಪೂರೆ (ವಿಧಾನ ಸಭೆಯಿಂದ ಚುನಾಯಿತರಾದವರು)

**ಉತ್ತರಿಸಬೇಕಾದ ದಿನಾಂಕ** : 13.12.2021

**ಉತ್ತರಿಸುವ ಸಚಿವರು** : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

*****

<table>
<tr><th colspan="2">ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಬೀದರ ಜಿಲ್ಲೆಯಲ್ಲಿ ರೈತರು ಕೃಷಿ ಚಟುವಟಿಕೆಗಳಿಗಾಗಿ ಬಳಸುವ ಪಂಪ್‌ಸೆಟ್‌ಗಳು ಸಕ್ರಮೀಕರಣಕ್ಕಾಗಿ ಐದು ವರ್ಷಗಳ ಹಿಂದೆ ಹಣ ಪಾವತಿಸಿದ್ದರು ಇದುವರೆವಿಗೂ ರೈತರಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ :</td><td>ರಾಜ್ಯದಲ್ಲಿನ ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವ ಕುರಿತು ಸರ್ಕಾರಿ ಸುತ್ತೋಲೆ ಸಂಖ್ಯೆ ಇಎನ್/41/ವಿಎಸ್‌ಸಿ/2014 ದಿನಾಂಕ:14-07-2014 ರ ಸರ್ಕಾರದ ಆದೇಶದ ಪ್ರಕಾರ ಅಕ್ರಮ-ಸಕ್ರಮ ಹಾಗೂ ಹೊಸದಾಗಿ ನೋಂದಾಯಿಸಲ್ಪಡುವ ಅರ್ಜಿಗಳು ಎಂಬ ಬೇಧವಿಲ್ಲದೆ ನೋಂದಾಯಿಸಲ್ಪಡುವ ನೀರಾವರಿ ಪಂಪ್‌ಸೆಟ್‌ಗಳ ವಿದ್ಯುತ್ ಸಂಪರ್ಕಕ್ಕೆ ರೂ.10,000/- ಶುಲ್ಕದ ಜೊತೆಗೆ ಠೇವಣಿ ಹಣವನ್ನು ಪಾವತಿಸಬೇಕಾಗಿರುತ್ತದೆ.<br><br>ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಬೀದರ ಜಿಲ್ಲೆಯಲ್ಲಿ ಅಕ್ರಮ ಸಕ್ರಮ ಯೋಜನೆಯಡಿಯಲ್ಲಿ (ಏಪ್ರಿಲ್ 2011 ರಿಂದ ಮಾರ್ಚ್ 2017ರ ಅಂತ್ಯಕ್ಕೆ (5 ವರ್ಷಗಳ ಹಿಂದೆ) ಒಟ್ಟು 12687 ಅರ್ಜಿಗಳು ನೋಂದಾಯಿಸಲ್ಪಟ್ಟಿದ್ದು, ಅವುಗಳ ವಿವರಗಳು ಕೆಳಕಂಡಂತಿವೆ:-<br><br>ಏಪ್ರಿಲ್ 2011 ರಿಂದ ಮಾರ್ಚ್ 2017ರ ಅಂತ್ಯಕ್ಕೆ (5 ವರ್ಷಗಳ ಹಿಂದೆ)
<table>
<tr><th>ವಿದ್ಯುತ್ ಸಂಪರ್ಕಕ್ಕಾಗಿ ಬಂದಿರುವ ಅರ್ಜಿಗಳ ಸಂಖ್ಯೆ</th><th>ಮೂಲಭೂತ ಸೌಕರ್ಯ ಶುಲ್ಕ ಮತ್ತು ಇತರೆ ಠೇವಣಿಗಳನ್ನು ಪಾವತಿಸಿರುವ ಅರ್ಜಿಗಳ ಸಂಖ್ಯೆ</th><th>ಮೂಲಭೂತ ಸೌಕರ್ಯ ಶುಲ್ಕ ಮತ್ತು ಇತರೆ ಠೇವಣಿಗಳನ್ನು ಪಾವತಿಸಬೇಕಾಗಿರುವ ಅರ್ಜಿಗಳ ಸಂಖ್ಯೆ</th><th>ಮೂಲಭೂತ ಸೌಕರ್ಯ ಕಲ್ಪಿಸಲಾಗಿರುವ ಅರ್ಜಿಗಳ ಸಂಖ್ಯೆ</th><th>ಮೂಲಭೂತ ಸೌಕರ್ಯ ಕಲ್ಪಿಸಬೇಕಾಗಿರುವ ಅರ್ಜಿಗಳ ಸಂಖ್ಯೆ</th></tr>
<tr><td>12687</td><td>6467</td><td>6220</td><td>5914</td><td>553</td></tr>
</table>
ಮಾರ್ಚ್ 2017ರ ಅಂತ್ಯಕ್ಕೆ ಬಾಕಿ ಇರುವ 553 ಅರ್ಜಿಗಳಿಗೆ ಮೂಲಭೂತ ಸೌಕರ್ಯ ಕಲ್ಪಿಸುವ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ.</td></tr>
<tr><td>ಆ)</td><td>ಇದುವರೆಗೆ ಸಕ್ರಮೀಕರಣಕ್ಕಾಗಿ ರೈತರಿಂದ ಬಂದಿರುವ ಅರ್ಜಿಗಳ ಸಂಖ್ಯೆ ಎಷ್ಟು : ಪಾವತಿಯಾಗಿರುವ ಹಣ ಎಷ್ಟು : (ತಾಲ್ಲೂಕುವಾರು ಮಾಹಿತಿ ಒದಗಿಸುವುದು)</td><td>ಅಕ್ರಮ ಸಕ್ರಮ ಯೋಜನೆಯಡಿಯಲ್ಲಿ ಬೀದರ್ ಜಿಲ್ಲೆಯಲ್ಲಿ (ಏಪ್ರಿಲ್ 2011 ರಿಂದ ಅಕ್ಟೋಬರ್ 2021ರ ಅಂತ್ಯಕ್ಕೆ) ಒಟ್ಟು 13624 ಅರ್ಜಿಗಳನ್ನು ನೋಂದಾಯಿಸಲ್ಪಟ್ಟಿದ್ದು, ಅವುಗಳ ಪೈಕಿ 12408 ರೈತರು ಮೂಲಭೂತ ಸೌಕರ್ಯ ಶುಲ್ಕ ರೂ.10,000/- ಮತ್ತು ಇತರ ಠೇವಣಿಗಳನ್ನು ಪಾವತಿಸಿರುತ್ತಾರೆ. ಅವುಗಳ ತಾಲ್ಲೂಕುವಾರು ವಿವರಗಳು ಕೆಳಕಂಡಂತಿವೆ:-</td></tr>
</table>

...2

**ಏಪ್ರಿಲ್ 2011 ರಿಂದ ಅಕ್ಟೋಬರ್ 2021ರ ಅಂತ್ಯಕ್ಕೆ**

| ಕ್ರ. ಸಂ | ತಾಲ್ಲೂಕು | ವಿದ್ಯುತ್ ಸಂಪರ್ಕಕ್ಕಾಗಿ ಬಂದಿರುವ ಅರ್ಜಿಗಳ ಸಂಖ್ಯೆ | ಮೂಲಭೂತ ಸೌಕರ್ಯ ಶುಲ್ಕ ಮತ್ತು ಇತರೆ ಠೇವಣಿಗಳನ್ನು ಪಾವತಿ ಸಿರುವ ಅರ್ಜಿಗಳ ಸಂಖ್ಯೆ | ಪಾವತಿಸಿರುವ ಹಣ (ಲಕ್ಷ ರೂ.ಗಳಲ್ಲಿ) |
|---|---|---|---|---|
| 1 | ಔರಾದ | 3235 | 3115 | 311.5 |
| 2 | ಭಾಲ್ಕಿ | 3823 | 3683 | 368.3 |
| 3 | ಬೀದರ | 2086 | 2034 | 203.4 |
| 4 | ಹುಮನಾಬಾದ | 1943 | 1549 | 154.9 |
| 5 | ಬಸವಕಲ್ಯಾಣ | 2537 | 2027 | 202.7 |
| | ಒಟ್ಟು | **13624** | **12408** | **1240.8** |

ಇ) ಪಂಪ್‌ಸೆಟ್‌ಗಳ ಸಕ್ರಮೀಕರಣಕ್ಕಾಗಿ ಅವಶ್ಯವಿರುವ ಅನುದಾನವನ್ನು ಬೆಸ್ಕಾಂಗಳಿಗೆ ಬಿಡುಗಡೆ ಮಾಡದಿರಲು ಕಾರಣವೇನು : (ಯಾವಾಗ ಬಿಡುಗಡೆ ಮಾಡಲಾಗುವುದು)

ರಾಜ್ಯದ ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಮೂಲಭೂತ ಸೌಕರ್ಯ ಕಲ್ಪಿಸಲು ಸರ್ಕಾರದಿಂದ ಯಾವುದೇ ಅನುದಾನ ಬಿಡುಗಡೆ ಆಗುತ್ತಿರುವುದಿಲ್ಲ.

ವಿದ್ಯುತ್ ಸರಬರಾಜು ಕಂಪನಿಗಳು ತಮ್ಮ ಆಂತರಿಕ ಸಂಪನ್ಮೂಲಗಳಿಂದ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ.

ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಯು ಬೀದರ್ ಜಿಲ್ಲೆಗೆ *2021-22ನೇ* ಸಾಲಿನಲ್ಲಿ ಬಂಡವಾಳ ಕಾಮಗಾರಿ ವೆಚ್ಚದಲ್ಲಿ ಪಂಪ್‌ಸೆಟ್‌ಗಳಿಗೆ ಮೂಲಭೂತ ಸೌಕರ್ಯ ಕಲ್ಪಿಸಲು ಒಟ್ಟು ರೂ.1041.57 ಲಕ್ಷಗಳನ್ನು ಹಂಚಿಕೆ ಮಾಡಲಾಗಿದೆ.

ಈ) ಸರ್ಕಾರದ ವಿಳಂಬದಿಂದ ಕೃಷಿ ಚಟುವಟಿಕೆಗಳಿಗೆ ಹಾಗೂ ರೈತರಿಗೆ ಆಗುತ್ತಿರುವ ತೊಂದರೆಗಳ ಬಗ್ಗೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು ? (ಮಾಹಿತಿ ಒದಗಿಸುವುದು)

ರಾಜ್ಯದ ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಮೂಲಭೂತ ಸೌಕರ್ಯ ಕಲ್ಪಿಸಲು ಸರ್ಕಾರದಿಂದ ಯಾವುದೇ ಅನುದಾನ ಬಿಡುಗಡೆ ಆಗುತ್ತಿರುವುದಿಲ್ಲ.

ಆದ್ದರಿಂದ, ಸರ್ಕಾರದಿಂದ ಯಾವುದೇ ವಿಳಂಬವಾಗಿರುವುದಿಲ್ಲ.

ಅಕ್ರಮ ಸಕ್ರಮ ಯೋಜನೆಯಡಿಯಲ್ಲಿ ಬೀದರ್ ಜಿಲ್ಲೆಯಲ್ಲಿ ಏಪ್ರಿಲ್ 2011 ರಿಂದ ಅಕ್ಟೋಬರ್ 2021ರ ಅಂತ್ಯಕ್ಕೆ ಒಟ್ಟು 13624 ಅರ್ಜಿಗಳು ನೋಂದಾಯಿಸಲ್ಪಟ್ಟಿದ್ದು, ಅವುಗಳ ವಿವರಗಳು ಕೆಳಕಂಡಂತಿವೆ:-

***ಏಪ್ರಿಲ್ 2011 ರಿಂದ ಅಕ್ಟೋಬರ್ 2021ರ ಅಂತ್ಯಕ್ಕೆ***

| ವಿದ್ಯುತ್ ಸಂಪರ್ಕಕ್ಕಾಗಿ ಬಂದಿರುವ ಅರ್ಜಿಗಳ ಸಂಖ್ಯೆ | ಮೂಲಭೂತ ಸೌಕರ್ಯ ಶುಲ್ಕ ಮತ್ತು ಇತರೆ ಠೇವಣಿಗಳನ್ನು ಪಾವತಿಸಿರುವ ಅರ್ಜಿಗಳ ಸಂಖ್ಯೆ | ಮೂಲಭೂತ ಸೌಕರ್ಯ ಶುಲ್ಕ ಮತ್ತು ಇತರೆ ಠೇವಣಿಗಳನ್ನು ಪಾವತಿಸ ಬೇಕಾಗಿರುವ ಅರ್ಜಿಗಳ ಸಂಖ್ಯೆ | ಮೂಲಭೂತ ಸೌಕರ್ಯ ಕಲ್ಪಿಸ ಲಾಗಿರುವ ಅರ್ಜಿಗಳ ಸಂಖ್ಯೆ | ಮೂಲಭೂತ ಸೌಕರ್ಯ ಕಲ್ಪಿಸ ಬೇಕಾಗಿರುವ ಅರ್ಜಿಗಳ ಸಂಖ್ಯೆ |
|---|---|---|---|---|
| 13624 | 12408 | 1216 | 10405 | 2003 |

ಮಾರ್ಚ್ 2017ರ ಅಂತ್ಯಕ್ಕೆ ಬಾಕಿ ಇದ್ದ 553 ಅರ್ಜಿಗಳು ಸೇರಿದಂತೆ ಅಕ್ಟೋಬರ್ 2021ರ ಅಂತ್ಯಕ್ಕೆ ಬಾಕಿ ಇರುವ ಒಟ್ಟು 2003 ಅರ್ಜಿಗಳಿಗೆ ಮೂಲಭೂತ ಸೌಕರ್ಯ ಕಲ್ಪಿಸುವ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ.

ಸಂಖ್ಯೆ: ಎನರ್ಜಿ 256 ಇಬಿಎಸ್ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು